## ಶಿಕ್ಷಕರ ವೃತ್ತಿಪರ ಅಭಿವೃದ್ಧಿ ರಚನೆಯ ಮರುಪರಿಶೀಲನೆ : ಗ್ಯಾನಶಾಲಾದ ಅನುಭವದ ಮೇರೆಗೆ ಪುನರಾಲೋಚನೆ - ಪಂಕಜ್ ಜೈನ್

ಶಿಕ್ಷಕರ ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮಗಳನ್ನು ವಿನ್ಯಾಸಗೊಳಿಸುವುದಕ್ಕೆ ಈ ಟಿಪ್ಪಣಿಯು ಕೆಲವು ಹೊಳಹುಗಳನ್ನು ಒದಗಿಸುತ್ತದೆ. ಇದು ಮೂರು ಮಾನದಂಡಗಳನ್ನು ಪೂರೈಸುತ್ತದೆ, 1) ಶಿಕ್ಷಕರ ಕೆಲಸದ ಅವಶ್ಯಕತೆಗಳಿಗೆ ಕಾರ್ಯಕ್ರಮದ ವಿನ್ಯಾಸವು ಹೊಂದಿಕೆಯಾಗಬೇಕು, 2) ಕಾರ್ಯಕ್ರಮದಲ್ಲಿ ಭಾಗವಹಿಸುವವರ ಶೈಕ್ಷಣಿಕ ಅಡಿಪಾಯದ ಮೇಲೆ ಕಾರ್ಯಕ್ರಮವು ರಚನೆಯಾಗಬೇಕು, ಹಾಗೂ 3) ಈ ಹಿಂದಿನ ಕಾರ್ಯಕ್ರಮಗಳಲ್ಲಿನ ಸಫಲ ಅಂಶಗಳನ್ನು ಹೊಸ ಕಾರ್ಯಕ್ರಮವು ಒಳಗೊಂಡಿರಬೇಕು. ಶಿಕ್ಷಕರ ಬೋಧನಾ ಕಾರ್ಯಕ್ರಮಗಳ ಬಗ್ಗೆ ಓಆಖಿಇ ಯವರಿಗಿಂತ ಗಮನಾರ್ಹವಾಗಿ ಭಿನ್ನವಾದ  ದೃಷ್ಟಿಕೋನವನ್ನು ನಮ್ಮ ವಿಶ್ಲೇಷಣೆಯು ಹೊಮ್ಮಿಸಿದೆ. ಆದ್ದರಿಂದ ಇದು ಚರ್ಚೆ ಹಾಗೂ ವಿಶ್ಲೇಷಣೆಗೆ ಯೋಗ್ಯವಾಗಿವೆ.

ಶಿಕ್ಷಕರು ನಿಭಾಯಿಸುವ ಪಾತ್ರದ ಅಗತ್ಯೆಗಳು
ನಮ್ಮ  ವಿಶ್ಲೇಷಣೆಗಾಗಿ, ಶಾಲಾ ಶಿಕ್ಷಕರು  ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸಲು  ಅವರು ಹೊಂದಿರಬೇಕಾದ ವಿಭಿನ್ನ ಕೌಶಲ-ಸಾಮರ್ಥ್ಯಗಳ ಆಧಾರದಲ್ಲಿ  ಶಿಕ್ಷಕರನ್ನು ಒಂಬತ್ತು ಬಗೆಯಾಗಿ ವಿಂಗಡಿಸಿದ್ದೇವೆ.  ಹಾಗೂ 1) ಶಿಕ್ಷಕರ ತರಬೇತುದಾರರು, 2) ಪಠ್ಯಕ್ರಮ ಯೋಜಕರು, 3) ಶಿಕ್ಷಣ ನೀತಿ ವಿಶ್ಲೇಷಕರು/ರಚಿಸುವವರು, ಹಾಗೂ 4) ಶಿಕ್ಷಣ ವಿದ್ವಾಂಸರು-ಚಿಂತಕರು, ಈ ನಾಲ್ಕು ಇತರ ವಿಭಾಗಗಳಲ್ಲಿ ವಿಂಗಡಿಸಿದ್ದೇವೆ.
ಬಹಳಷ್ಟು ಶಿಕ್ಷಕರ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಸಾಮಾನ್ಯವಾಗಿ ಒಳಗೊಂಡಿರುವ 14 ಕೌಶಲ/ಸಾಮರ್ಥ್ಯಗಳನ್ನು ಆರಿಸಿದ್ದೇವೆ.
ನಮ್ಮ ವಿಶ್ಲೇಷಣೆಯ ಆಧಾರದಲ್ಲಿ, ಮೇಲೆ ಹೇಳಿರುವ ಶಿಕ್ಷಣತಜ್ಞರ 13 ವಿಭಾಗಗಳು/ಗುಂಪುಗಳಿಗೂ ಅಗತ್ಯವಿರುವ ಮಟ್ಟ ಹಾಗೂ ಪ್ರಸ್ತುತ ಸಾಧಿಸಿರುವ ಮಟ್ಟದ ಒಂದು ಪಟ್ಟಿಯನ್ನು ಮಾಡಲು ಪ್ರಯತ್ನಿಸಿದ್ದೇವೆ. ಇದನ್ನು ಕೊನೆಯಲ್ಲಿ ಕೊಟ್ಟಿರುವ ಪಟ್ಟಿಯಲ್ಲಿ ನಮೂದಿಸಲಾಗಿದೆ. ಅಪೇಕ್ಷಿತ ಹಾಗೂ ಈಗಾಗಲೇ ಸಾಧಿಸಿರುವ ಕೌಶಲ/ಸಾಮರ್ಥ್ಯಗಳ ಮಟ್ಟದ ನಡುವಿನ ಕಂದಕವನ್ನು ಕಡಿಮೆಗೊಳಿಸುವುದೇ ವೃತ್ತಿಪರ ಅಭಿವೃದ್ಧಿ ತಂತ್ರ/ಕಾರ್ಯಕ್ರಮಗಳಲ್ಲಿ ಶಿಕ್ಷಕರು  ಸಾಧಿಸಬೇಕಾದ ಗುರಿಯಾಗಬೇಕು.

{ ಹೆಚ್ಚಿನ ವಿಶ್ಲೇಷಣೆಗಾಗಿ  ಶಿಕ್ಷಕರ ಹಾಗೂ ಅಗತ್ಯ ಕೌಶಲಗಳು ಇವೆರಡರಲ್ಲೂ ನಾವು ಮಾಡಿರುವ ವಿಂಗಡಣೆಗಳನ್ನು ಕಡಿಮೆ ಅಥವಾ ಹೆಚ್ಚಿನ ಸಂಖ್ಯೆಯ ವಿಭಾಗಗಳಾಗಿ ಕುಗ್ಗಿಸಲು ಅಥವಾ ಹಿಗ್ಗಿಸಲೂಬಹುದು. ಆದರೆ ನಾವು ಹೇಳಲು ಬಯಸುತ್ತಿರುವ ವಿಷಯಕ್ಕೆ ಈ ವಿಂಗಡಣೆ ಸೂಕ್ತವೆಂದು ನಮ್ಮ ಅನಿಸಿಕೆ}.

ಒಬ್ಬ ವಿಶ್ವವಿದ್ಯಾಲಯ ಮಟ್ಟದ ಪ್ರಾಧ್ಯಾಪಕ,  ಅವನ/ಅವಳ ಕ್ಷೇತ್ರದಲ್ಲಿ ಪ್ರಾವೀಣ್ಯತೆ ಹೊಂದಿರುವ ಸ್ನಾತಕ ತರಗತಿಯ ಶಿಕ್ಷಕನಾಗಿ ವಹಿಸುವ ಪಾತ್ರದಲ್ಲಿ 1) ಶಿಕ್ಷಣತಜ್ಞ/ ಚಿಂತಕ-ಸಂಶೋಧಕ, 2) ನೀತಿ ವಿಶ್ಲೇಷಕ, 3) ಪಠ್ಯಕ್ರಮ ಯೋಜಕ- ರಚನಕಾರ, ಹಾಗೂ 4) ಶಿಕ್ಷಕರ ತರಬೇತುದಾರ-ಮಾರ್ಗದರ್ಶಿ ಈ ಎಲ್ಲ ಪಾತ್ರಗಳನ್ನೂ ಅಂತರ್ಗತಗೊಳಿಸಿಕೊಂಡು ನಿರ್ವಹಿಸುವುದು ಅಸಾಮಾನ್ಯವಾದ ವಿಷಯವೇನಲ್ಲ. ಈ ನಾಲ್ಕೂ ಪಾತ್ರಗಳನ್ನು ಒಟ್ಟಾಗಿಸುವುದು ಯಾವುದಾದರೂ ಸಣ್ಣ ವ್ಯಾಪ್ತಿಯ ವಿಷಯದಲ್ಲಿ ಆಳದ ಪ್ರಾವೀಣ್ಯತೆ ಹೊಂದಿರುವಲ್ಲಿ ಮಾತ್ರ ಸಾಧ್ಯ ಎನ್ನುವುದು ನಮ್ಮ ಅಭಿಪ್ರಾಯ, ಉದಾಹರಣೆಗೆ ಸಾವಯವ ರಸಾಯನ ವಿಜ್ಞಾನ ಅಥವಾ ಭಾರತದ ಮಧ್ಯಕಾಲೀನ ಇತಿಹಾಸ. ಆದರೆ ಶಾಲಾ ಶಿಕ್ಷಕರಿಗೆ ಇದು ಅಸಾಧ್ಯ. ಏಕೆಂದರೆ ಅವರು ಪ್ರಾಥಮಿಕ ಮಟ್ಟದಲ್ಲಿ ವಿವಿಧ ತರಗತಿಗಳಲ್ಲಿ ನಾನಾ ವಿಷಯಗಳನ್ನು ಪಾಠಮಾಡಬೇಕು ಇಲ್ಲವೇ ವಿಸ್ತಾರವಾದ ಹರಹುಳ್ಳ ವಿಜ್ಞಾನ, ಗಣಿತ ಇಂತಹವುಗಳನ್ನು ವಿವಿಧ ತರಗತಿಗಳಿಗೆ ಪಾಠಮಾಡಬೇಕು. ಅವರ ಕೆಲಸದ ವಿಸ್ತಾರ ಮತ್ತು 20ರಿಂದ-40ರಷ್ಟು ಚೈತನ್ಯಶೀಲ ಮಕ್ಕಳೊಂದಿಗೆ ದಿನಕ್ಕೆ 5 ಘಂಟೆಗಳಷ್ಟು ವ್ಯವಹರಿಸುವುದು ಸುಲಭವೇನಲ್ಲ. ಹಾಗಾಗಿ ಪಠ್ಯದಲ್ಲಿರುವಷ್ಟನ್ನು ಅಥವಾ ಪರೀಕ್ಷೆಗೆ ಸಾಕಾಗುವಷ್ಟನ್ನು ಮಾತ್ರ ಪಾಠಮಾಡುವುದಕ್ಕಿಂತ ಹೆಚ್ಚಾಗಿ ಮತ್ತೇನನ್ನೂ ಸಾಧಾರಣವಾಗಿ ಮಾಡಲಾರರು. ಕೆಲವು ಪ್ರತಿಷ್ಠಿತ ಶಾಲೆಗಳಲ್ಲೇನೋ ವಿಶ್ವವಿದ್ಯಾಲಯದ ಮಟ್ಟದ ಪರಿಸರವನ್ನು ಶಿಕ್ಷಕರಿಗೆ ಕಟ್ಟಿಕೊಡಲು ಪ್ರಯತ್ನ ಪಡುತ್ತಾರೆ -ವಿಷಯದ ಶಿಕ್ಷಕರೇ ಪಠ್ಯಕ್ರಮವನ್ನು ನಿರ್ಧರಿಸುವುದು, ಹೀಗೆ. ಸಾಮಾನ್ಯವಾಗಿ ಒಬ್ಬ ಶಿಕ್ಷಕ ಪ್ರತಿದಿನವೂ ಹಲವು ವಿಷಯಗಳನ್ನು ಪಾಠಮಾಡಬೇಕಾದ ಪರಿಸ್ಥಿತಿಯು ಬಹಳಷ್ಟು ಕಡಿಮೆ-ಮಧ್ಯಮ ಖರ್ಚಿನ ನಗರ ಯಾ ಗ್ರಾಮೀಣ ಎರಡೂ ಶಾಲೆಗಳಲ್ಲಿ ಸಾಮಾನ್ಯ. ಬೇರೆ ಬೇರೆ ತರಗತಿಗಳಲ್ಲಿ ಬೇರೆ ಬೇರೆ ವಿಷಯಗಳನ್ನು ಪಾಠ ಮಾಡುವ ಇವರಿಗೆ ದಿನವಹಿ  ಅಧ್ಯಾಪನದ ಯೋಜನೆಯನ್ನೇ ಸರಿಯಾಗಿ ಮಾಡಲು ಸಾಧ್ಯವಾಗುವ ಚೈತನ್ಯ, ಸಮಯ ಏನೂ ಉಳಿದಿರುವುದಿಲ್ಲ. (ವಿಸೂ: ಪ್ರತಿಷ್ಠಿತ ಎಂದರೆ ಇಲ್ಲಿ ಕೇವಲ ಅಂಬಾನಿ ಅಂತರಾಷ್ಟ್ರೀಯ ಶಾಲೆಗಳಷ್ಟೇ ಅಲ್ಲ, ಬಡವರಿಗಾಗಿರುವ ಆಕಾಂಕ್ಷ ಅಥವಾ ದಿಗಂತರ್, ಸಾಮಾಜಿಕ-ಸಾಂಸ್ಕೃತಿಕವಾಗಿ ಮುಂದುವರೆದಿರುವವರಿಗಾಗಿ ಇರುವ ರಿಷಿವ್ಯಾಲಿ ಅಥವಾ ಮುಂಚೂಣಿಯಲ್ಲಿರುವ ಮಕ್ಕಳಿಗಾಗಿನ ನವೋದಯ ಹೀಗೆ ಎಲ್ಲವೂ ಸೇರುತ್ತವೆ).

ಪ್ರಸ್ತಾವನೆ - 1
ಪ್ರತಿಷ್ಠಿತರ/ಪ್ರತಿಷ್ಠಿತ ಶಾಲೆಗಳನ್ನು ಹೊರತುಪಡಿಸಿ ಇತರೆಲ್ಲ ಶಿಕ್ಷಕರ ವೃತ್ತಿ ಅಭಿವೃದ್ಧಿ ಯೆಂದರೆ ಅಧಿಕೃತ ಪಠ್ಯವನ್ನು ಚೆನ್ನಾಗಿ ಪಾಠಮಾಡುವುದಕ್ಕೆ ತರಬೇತು ನೀಡುವುದೇ  ಆಗಿದೆ.

*ವಿಶ್ವದೆಲ್ಲಡೆಯ ಪ್ರಾಥಮಿಕ ಪಠ್ಯಕ್ರಮದಲ್ಲಿ ಮೂರು ವಿಷಯಗಳೇ ಕೇಂದ್ರಬಿಂದುವಾಗಿರುವುದು*

ಪ್ರಾಥಮಿಕ ಹಂತದ ಶಾಲಾ ಪಠ್ಯಕ್ರಮದಲ್ಲಿ ಭಾಷಾ ಕೌಶಲ, ಗಣಿತ ಮತ್ತು ಪರಿಸರ ವಿಜ್ಞಾನ ಇವು ಇರುತ್ತವೆ. ಕಿರಿಯ ಪ್ರಾಥಮಿಕ ವಿಭಾಗದಲ್ಲಿ ಪಾಠಮಾಡುವವರಿಗೆ ವಿಜ್ಞಾನ ಮತ್ತು ಗಣಿತದಲ್ಲಿ ಪ್ರೌಢಶಾಲಾ ಮಟ್ಟದ ಸಮಾಧಾನಕರ ಪರಿಣತಿ ಅತ್ಯಗತ್ಯ ಎಂಬುದನ್ನು ತಿಳುವಳಿಕೆಯುಳ್ಳವರು ಬಹುತೇಕವಾಗಿ ಒಪ್ಪುತ್ತಾರೆ. ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಪಾಠ ಮಾಡಲು ಕಡಿಮೆಯೆಂದರೂ ಪದವಿ ಪೂರ್ವಮಟ್ಟದ ಪರಿಣತಿ ಈ ವಿಷಯಗಳಲ್ಲಿ ಇರಬೇಕು. ಇನ್ನು ಭಾಷಾ ಶಿಕ್ಷಕರಾದರೂ ಮೊದಲ ಭಾಷೆ, ಎರಡನೆಯ ಭಾಷೆ ಮತ್ತು ಬಹು ಭಾಷೆಗಳ ಕಲಿಕೆಯು ಹೇಗೆ ಎಂಬುದನ್ನು ತಿಳಿಸಬಲ್ಲಷ್ಟು ಭಾಷಾಶಾಸ್ತ್ರದ ಪರಿಜ್ಞಾನ ಹೊಂದಿರಬೇಕು. ದಿನನಿತ್ಯದ ಶಾಲೆಯ ಪರಿಸ್ಥಿತಿಯಲ್ಲಿ ಒಬ್ಬ ಶಿಕ್ಷಕನ ಅನುಪಸ್ಥಿತಿಯಲ್ಲಿ ಮತ್ತೊಬ್ಬರು ಪ್ರಾಥಮಿಕ ಶಾಲೆಯ ಎಲ್ಲ ತರಗತಿ, ಎಲ್ಲ ವಿಷಯಗಳನ್ನೂ ಪಾಠ ಮಾಡುವಂತಿರಬೇಕು. ಇದು ಸ್ವಯಂವೇದ್ಯವಾದ ವಿಷಯ.

ಪ್ರಾಥಮಿಕ ಶಾಲಾ ಶಿಕ್ಷಕರ ವೃತ್ತಿಪರ ಅಭಿವೃದ್ಧಿಯು, ಎರಡನೆಯ ಹಂತದ ಗಣಿತ ಹಾಗೂ ವಿಜ್ಞಾನದ ವಿಷಯಗಳಲ್ಲಿ ತೃಪ್ತಿಕರ ಮಟ್ಟದ ಸಾಮರ್ಥ್ಯವನ್ನು ದೃಢಪಡಿಸಬೇಕಲ್ಲದೆ ಭಾಷೆಗಳನ್ನು ಕಲಿಯುವ ಬಗೆಯನ್ನೂ ಅರಿತುಕೊಳ್ಳುವುದಾಗಿದೆ. ಅಗತ್ಯವಾದ ಕೌಶಲ/ ಸಾಮರ್ಥ್ಯಗಳ ಬೆಳವಣಿಗೆಗೆ ಅನುಕೂಲವಾಗುವಂತೆ ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮಗಳನ್ನು ವಿನ್ಯಾಸಗೊಳಿಸುವುದಕ್ಕೆ ಇದು ಮೂಲಭೂತ ಅವಶ್ಯಕತೆಯಾಗಿದೆ.

**II. ತರಬೇತುದಾರರ ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಹೊಸತಾಗಿ ಸೇರ್ಪಡೆಯಾಗುವವರ ಕೌಶಲ/ ಸಾಮರ್ಥ್ಯಗಳ ಮಟ್ಟ**

ಪರೀಕ್ಷಾ ಮಂಡಲಿ/ ವಿಶ್ವವಿದ್ಯಾಲಯದ ಹಂತದಲ್ಲಿ ಶೇಕಡ 65-70 ಅಂಕಗಳ ಗಳಿಕೆ ಸಮಾಧಾನಕರ ಪರಿಣತಿಯನ್ನು ಸಾಧಿಸಿರುವುದರ ಸೂಚನೆಯೆನ್ನಬಹುದು. ಭಾರತೀಯ ಶಾಲಾ ಹಾಗೂ ವಿಶ್ವವಿದ್ಯಾಲಯ ಶಿಕ್ಷಣ ಪದ್ಧತಿಯಲ್ಲಿ, ಒಬ್ಬ ವ್ಯಕ್ತಿಯು ವಿಜ್ಞಾನೇತರ ಪದವಿಯಲ್ಲಿ, ಪದವಿ ಅಥವಾ ಸ್ನಾತಕೋತ್ತರ ಪದವಿಯನ್ನು ಹೊಂದಬಹುದಾಗಿದ್ದು, ಪ್ರೌಢಶಾಲಾ ಅಥವಾ ಮಾಧ್ಯಮಿಕ ಶಾಲಾ ಮಟ್ಟದ ಗಣಿತ ಹಾಗೂ ವಿಜ್ಞಾನ ವಿಷಯದಲ್ಲಿ ಸಮಾಧಾನಕರ ಜ್ಞಾನ ಹೊಂದಿರದಿದ್ದರೂ ಶಿಕ್ಷಕ ತರಬೇತಿ ಕಾರ್ಯಕ್ರಮದಲ್ಲಿ ಭಾಗವಹಿಸಬಹುದಾಗಿದೆ. ಪ್ರಸ್ತುತ ಬಹುತೇಕ ಶಿಕ್ಷಕರು ಅಥವಾ ಶಿಕ್ಷಕ ತರಬೇತಿ ಕಾರ್ಯಾಗಾರದಲ್ಲಿ ಭಾಗವಹಿಸುವವರು, ಶಾಲೆಯಲ್ಲಿ ಎರಡು ಪ್ರಮುಖ ವಿಷಯಗಳಾದ ಗಣಿತ ಹಾಗೂ ವಿಜ್ಞಾನದಲ್ಲಿ ಅವಶ್ಯಕವಾಗಿ ಹೊಂದಿರಬೇಕಾದ ಜ್ಞಾನ/ ಪರಿಣತಿಗಿಂತ ಕಡಿಮೆ ಮಟ್ಟವನ್ನು ಹೊಂದಿದವರಾಗಿರುತ್ತಾರೆ. ಭಾಷಾಶಾಸ್ತ್ರಜ್ಞರು ವಿವರಿಸಿರುವಂತೆ, ಭಾಗವಹಿಸುವವರಲ್ಲಿ ಅನೇಕರು, ಭಾಷೆಯನ್ನು ಕಲಿಯುವ/ ಸ್ವಾಧೀನಪಡಿಸಿಕೊಳ್ಳುವ ಬಗ್ಗೆ ತಿಳುವಳಿಕೆ ಇಲ್ಲದವರು ಅಥವಾ ಪ್ರಯೋಜನಕ್ಕೆ ಬಾರದ ನಂಬಿಕೆಗಳನ್ನು ಹೊಂದಿದವರೆ ಆಗಿರುತ್ತಾರೆ.

ಪ್ರಸ್ತಾವನೆ 3 :
ಶಿಕ್ಷಕರ ತರಬೇತಿ ಕಾರ್ಯಾಗಾರಗಳಲ್ಲಿ ಭಾಗವಹಿಸುವವರಲ್ಲಿ, ಅಗತ್ಯವಿರುವ ಗಣಿತ ಹಾಗೂ ವಿಜ್ಞಾನಗಳ ಎರಡನೇ ಹಂತದ ಜ್ಞಾನದ ಕೊರತೆಯನ್ನು ತುಂಬುವುದೇ ಭಾರತೀಯ ಶಿಕ್ಷಕರ ತರಬೇತಿ ಕಾರ್ಯಕ್ರಮಗಳ ಮೊದಲನೆಯ ಆದ್ಯತೆಯಾಗಿರಬೇಕು.

ಪ್ರಸ್ತಾವನೆ 4 :
ಬಹುತೇಕ ಶಾಲಾ ಶಿಕ್ಷಕರಿಗೆ ಮರುದಿನದ ಪಾಠಗಳನ್ನು ಸ್ವತಂತ್ರವಾಗಿ ಯೋಜಿಸುವುದಕ್ಕೆ ಸಮಯ/ ಸ್ಥಳಾವಕಾಶ/ ಚೈತನ್ಯ / ಸಾಮರ್ಥ್ಯವಾಗಲಿ ಇಲ್ಲದಿರುವಾಗ, ತರಗತಿಗಳಲ್ಲಿ ಬಳಸಬೇಕಾದ ಅನುಮೋದಿತ ಕಲಿಕಾ ಸಾಮಗ್ರಿಗಳಲ್ಲಿ ಅಳವಡಿಸಿರುವ ಪಠ್ಯಕ್ರಮ ಯೋಜನೆಯನ್ನು ಮರುವಿನ್ಯಾಸಗೊಳಿಸುವುದಿರಲಿ ಮರುವ್ಯಾಖ್ಯಾನಿಸಲಿ ಎಂದು ನಿರೀಕ್ಷಿಸುವುದು ಅವಾಸ್ತವಿಕವೆನಿಸುತ್ತದೆ. ಹಾಗಾಗಿ, ಪಠ್ಯಕ್ರಮಗಳನ್ನು ವಿನ್ಯಾಸಗೊಳಿಸುವುದಕ್ಕೆ ಹಾಗೂ ವ್ಯಾಖ್ಯಾನಿಸುವುದಕ್ಕೆ ಅಗತ್ಯವಾದ 'ಶಿಕ್ಷಣದ ತತ್ವಶಾಸ್ತ್ರ', 'ಸಿದ್ಧಾಂತಗಳ ಕಲಿಕೆ', 'ಶಿಕ್ಷಣ ನೀತಿಗಳ ವಿಮರ್ಶಾತ್ಮಕ ವಿಶ್ಲೇಷಣೆ' ಗಳಂತಹ ಪಠ್ಯಕ್ರಮಗಳು ಶಾಲಾ ಶಿಕ್ಷಕರಿಗೆ ಕನಿಷ್ಠ ಆದ್ಯತೆಯ ವಿಷಯವಾಗಿರಬೇಕು, ಪ್ರತಿಷ್ಠಿತ ಶಾಲೆಗಳಲ್ಲಿ ಹೊರತುಪಡಿಸಿ.

**III. ಈ ಹಿಂದೆ ಸಾಧಿಸಿದ ಯಶಸ್ಸನ್ನು ಬೋಧಕರ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಅಳವಡಿಸುವುದು**

1. *ಕಲಿಕೆಯಲ್ಲಿ ಪ್ರಶ್ನಿಸುತ್ತಾ ತಿಳಿದುಕೊಳ್ಳುವ ವಿಧಾನ*
   ಪ್ರಶ್ನಿಸುತ್ತಾ ಕಲಿಯುವ ಕಲಿಕೆಯೇ ಪರಿಣಾಮಕಾರಿ ಎಂದು ಬಹುತೇಕ ಶಿಕ್ಷಣತಜ್ಞರು ಅಭಿಪ್ರಾಯ ಪಡುತ್ತಾರೆ, ಉದಾಹರಣೆಗೆ, ಶಿಕ್ಷಣಶಾಸ್ತ್ರದ ಸಂದರ್ಭದಲ್ಲಿ ಎಂಐಟಿಯ ಪ್ರೊ. ಹಾಲೆಯವರು ಇದನ್ನು ಪ್ರಾರಂಭಿಸಿದವರು; ಹಾಗೂ ಆನಂತರ ಇನ್ನೂ ಅನೇಕ ಸಂದರ್ಭಗಳಲ್ಲಿ 'ಯೋಜನೆ ಆಧಾರಿತ', 'ಪ್ರಯೋಗ ಆಧಾರಿತ', 'ಸೈದ್ಧಾಂತಿಕ ಪರೀಕ್ಷೆ', 'ವಿನ್ಯಾಸ ಆಧಾರಿತ' ಹೀಗೆ ಪರ್ಯಾಯ ಶೀರ್ಷಿಕೆಗಳ ಅಡಿಯಲ್ಲಿ ಮುಂದುವರೆಸಲಾಗಿದೆ.

ಪ್ರಸ್ತಾವನೆ 5 :

'ಪ್ರಶ್ನಿಸಿ ತಿಳಿದುಕೊಳ್ಳುವ ವಿಧಾನ' ಎಂಬ ಕಲಿಕೆಯಲ್ಲಿನ ಮಹತ್ವದ ಅಂಶವನ್ನು ಶಿಕ್ಷಕರ ವೃತ್ತಿಪರ ಶಿಕ್ಷಣವು ಒಳಗೊಂಡಿರಲೇಬೇಕು, ಇದರಿಂದ ಅವರ ಶಿಕ್ಷಣವು ಪರಿಣಾಮಕಾರಿ ಹಾಗೂ ಆಳವಾಗಿ ಬೇರೂರುವುದಲ್ಲದೇ, ಈ ವಿಧಾನವನ್ನು ಸಾಕಷ್ಟು ಅಭ್ಯಸಿಸಿವುದರಿಂದ ಆ ವಿಧಾನವನ್ನು ತಮ್ಮ ತರಗತಿಗಳಲ್ಲಿ ಪುನರಾವರ್ತಿಸಲು ಅನುಕೂಲವಾಗುತ್ತದೆ. ಹಾಗಾಗಿ ಲಗತ್ತಿಸಲಾದ ಕೋಷ್ಟಕದಲ್ಲಿ ಸೂಚಿಸಿರುವಂತೆ, ಆಯಾ ವಿಷಯಗಳನ್ನು

ಅಭ್ಯಸಿಸಲು ‘ಪ್ರಮಾಣೀಕೃತ ಪಠ್ಯಕ್ರಮ’ಕ್ಕಿಂತ ಸರಣಿ ‘ಕಾರ್ಯಾಗಾರ’ಗಳ ಬಳಕೆಯನ್ನು ಒಂದು ಉತ್ತಮ ಸಾಧನವಾಗಿ ಬಳಸಬೇಕೆಂದು ನಾವು ಶಿಫಾರಸು ಮಾಡುತ್ತೇವೆ.

2. ಕೆಲಸ ಮಾಡುತ್ತಾ ಕಲಿಯುವುದು ಹಾಗೂ ಮಾರ್ಗದರ್ಶನದ ಮೂಲಕ ಕಲಿಯುವುದು ಹಾಗೂ ಚಿಂತನಾತ್ಮಕ ಅಭ್ಯಾಸವನ್ನು ಜೊತೆಯಾಗಿಸುವುದು

ಪ್ರಶ್ನಿಸುತ್ತಾ ಕಲಿಯುವುದು ಪರಿಣಾಮಕಾರಿ ಎಂಬುದು ಒಂದೆಡೆ ಒಪ್ಪಿತವಾಗಿದ್ದರೆ, ಮತ್ತೊಂದೆಡೆ ಈ ಪದ್ಧತಿಯನ್ನು ್ನ ಸಾಂಪ್ರದಾಯಿಕವಾಗಿ ಕಲಿಸುವುದರೊಂದಿಗೆ ಜೋಡಿ ಸಿ ಅಳವಡಿಸಿಕೊಳ್ಳಬೇಕು ಎಂಬುದು ವ್ಯಾಪಕವಾಗಿ ಸ್ವೀಕೃತವಾಗಿದೆ. ಕಾಲಕ್ರಮೇಣ ಕಲಿಕೆಯ ಮಟ್ಟದ ಕುಸಿತವನ್ನು ಎಲ್ಲೆಡೆಯೂ ಗುರುತಿಸಲಾಗಿದೆ.

**ಪ್ರಸ್ತಾವನೆ 6 :**
ಈ ಎರಡೂ ಅಂಶಗಳಿಗೆ ಅನುಕೂಲಕರವಾಗಿ ಶಿಕ್ಷಕರ ತರಬೇತಿಯನ್ನು ವಿನ್ಯಾಸಗೊಳಿಸಲು, ಶಿಕ್ಷಕರ ಅರ್ಹತಾ ಪ್ರಮಾಣಪತ್ರಕ್ಕೆ ಪೂರಕವಾಗಿರುವಂತೆ ಔಪಚಾರಿಕ ಶಿಕ್ಷಕ ತರಬೇತಿಯ ಹೆಚ್ಚಿನ ಭಾಗವುವೃತ್ತಿನಿರತ ಬೋಧನಾ ಅವಧಿಗಳ ಸರಣಿಯ ರೂಪದಲ್ಲಿರಬೇಕೆಂದು ನಾವು ಸೂಚಿಸುತ್ತೇವೆ. ಇದರ ಪೂರ್ಣಗೊಳಿಸುವಿಕೆ ಶಿಕ್ಷಕರ ತರಬೇತಿ ಪ್ರಮಾಣಪತ್ರ/ಪದವಿಗೆ ಸಂಬಂಧಿಸಿರಬೇಕು.

**ಶಿಕ್ಷಕ ತರಬೇತಿಗೆ ಉತ್ತಮ ಪರಿಹಾರಗಳ ಬಗ್ಗೆ ಚರ್ಚೆ- ಪರಿಶೊಧನೆಗಳು**

ಮೇಲಿನ ವಿಶ್ಲೇಷಣೆಯನ್ನು ಕೆಳಗೆ ನೀಡಿರುವ ಪಟ್ಟಿಯಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಇದು ಎನ್‌ಸಿಟಿಇ(NCTE)' ಶಿಫಾರಸಿನ ಅನುಸಾರ ದೇಶದಲ್ಲಿ ಅನುಸರಿಸುತ್ತಿರುವ ಶಿಕ್ಷಕರ ತರಬೇತಿ ಚೌಕಟ್ಟಿಗಿಂತ ಬಹುಪಾಲು ಬೇರೆಯೇ ಆಗಿದೆ.

ಪಟ್ಟಿಯಲ್ಲಿ 13 ಉದ್ದ ಸಾಲುಗಳಿದ್ದು ಒಂದೊಂದು ಸಾಲು ಶಿಕ್ಷಕರು ನಿರ್ವಹಿಸಬೇಕಾಗಿರುವ 13 ಕರ್ತವ್ಯಗಳ ವಿಭಾಗಗಳನ್ನು ಒಳಗೊಂಡಿದೆ. ಪಟ್ಟಿಯಲ್ಲಿರುವ 14 ಅಡ್ಡಸಾಲುಗಳು ಶಿಕ್ಷಕರು ನಿರ್ವಹಿಸಬೇಕಾದ ಕರ್ತವ್ಯಕ್ಕೆ ಮುಖ್ಯವಾಗಿ ಬೇಕು ಎಂದು ಪರಿಗಣಿಸಿರುವ ಸಾಮರ್ಥ್ಯಗಳು ಹಾಗೂಕೌಶಲಗಳಿಗೆ ಸಂಬಂಧಿಸಿವೆ. ಪ್ರತಿ 14*13 ಕೋಶಗಳಲ್ಲಿ, ಪರಿಣಾಮಕಾರಿ ಕೆಲಸದ ನಿರ್ವಹಣೆಗೆ ಯಾವ ಮಟ್ಟದ ಕೌಶಲ/ಸಾಮರ್ಥ್ಯದ ಅಗತ್ಯವಿದೆ ಹಾಗೂ ಈಗ ಪ್ರಸ್ತುತವಿರುವ ಶಿಕ್ಷಕ ತರಬೇತಿ ಕಾರ್ಯಕ್ರಮಗಳಲ್ಲಿ ಶಿಕ್ಷಕರು ಯಾವ ಮಟ್ಟವನ್ನು ಸಾದಿಸುತ್ತಾರೆ ಎಂಬುದರ ಬಗ್ಗೆ ನಾವೊಂದು ಪ್ರಯೋಗಸಿದ್ಧ ತೀರ್ಪನ್ನು ಸೂಚಿಸಿದ್ದೇವೆ. 1-5 ರ ಶ್ರೇಣಿಯಲ್ಲಿ ನೀಡಿರುವ 2 ಸಂಖ್ಯೆಗಳು, ಕಂಸದ ಹೊರಗೆ ಹಾಗೂ ಒಳಗೆ, ಈ ಮಟ್ಟವನ್ನು ಸೂಚಿಸುತ್ತವೆ ಹಾಗೂ 5 ಉನ್ನತ ಮಟ್ಟವನ್ನು ಸೂಚಿಸುತ್ತದೆ. ಅಪೇಕ್ಷಿತ ಹಾಗೂ ಸಾಮಾನ್ಯವಾಗಿ ಸಾಧಿಸಿದ ಮಟ್ಟಗಳ ನಡುವಿನ ಅಂತರ ಶಿಕ್ಷಕರ ಪರಿಣಾಮಕಾರಿ ವೃತ್ತಿಪರ ಬೆಳವಣಿಗೆಗೆ ಅಗತ್ಯವಾಗಿ ಬೇಕಾಗಿರುವ ಸುಧಾರಣಾ ಕ್ರಮಗಳ ಸ್ವರೂಪ ಹಾಗೂ ವ್ಯಾಪ್ತಿಯನ್ನು ಸೂಚಿಸುತ್ತದೆ.

**ಉಪಸಂಹಾರ** :

ನಮ್ಮ ವಿಶ್ಲೇಷಣೆಯು ಕಿರಿಯ ಹಾಗೂ ಹಿರಿಯ ಪ್ರಾಥಮಿಕ ಹಂತದ ಶಿಕ್ಷಕರ ತರಬೇತಿಗೆ ಒಂದು ಸ್ವರೂಪವನ್ನು ಸೂಚಿಸುತ್ತದೆ. ಇದರಲ್ಲಿ ಅವಧಿಯಲ್ಲಿ ಏಕಲವ್ಯ/ವಿದ್ಯಾ ಭವನ್/ ದಿಗಂತರ್ ತರಬೇತುದಾರರು ಜನಪ್ರಿಯಗೊಳಿಸಿದ ಮಾದರಿಯ 2 ರಿಂದ 3 ಒಂದು ವಾರದ ಕಾರ್ಯಾಗಾರಗಳ ಒಂದು ವರ್ಷದ ಕಾರ್ಯಕ್ರಮವನ್ನು ಸೂಚಿಸಲಾಗಿದೆ. 3 ಪ್ರಮುಖ ವಿಷಯಗಳ ಮೇಲೆ ಹೆಚ್ಚಾಗಿ ಕೇಂದ್ರೀಕೃತಗೊಂಡಿರುವ 2 ರಿಂದ 3 ಪಠ್ಯಕ್ರಮಗಳ ಅವಧಿಯನ್ನು ಒಳಗೊಂಡಿರುತ್ತದೆ. ಈ ಕಾರ್ಯಕ್ರಮದ ಇನ್ನೊಂದು ಭಾಗದಲ್ಲಿ ಮಾರ್ಗದರ್ಶಿತ ಅಭ್ಯಾಸದ ಆಧಾರದ ಮೇಲೆ ರೂಪಿತವಾದ ಕಡಿಮೆ ಅವಧಿಯ ಮನನಾತ್ಮಕ ವಿಮರ್ಶೆಗಳ ಸರಣಿಯಾಗಿದ್ದು, ಒಂದು ವರ್ಷದವರೆಗೆ ಶಿಕ್ಷಕರಾಗಿ ನಿಯಮಿತ ಕೆಲಸ ದ ಜತೆಗೇಮುಂದುವರೆಯುತ್ತದೆ. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಕರ ಕಾರ್ಯಕ್ರಮ ರೂಪಿಸುವಾಗಿನ ವ್ಯತ್ಯಾಸ ದಾಖಲಾತಿ ಸಮಯದಲ್ಲಿನ ಅವರ ಶಿಕ್ಷಣದ ಮಟ್ಟವನ್ನು ಆಧರಿಸಿರಬಹುದಾಗಿದ್ದು, ಪ್ರಾಥಮಿಕಕ್ಕೆ ಪದವಿಯ ಹಂತ ಹಾಗೂ ಮಾಧ್ಯಮಿಕಕ್ಕೆ ಸ್ನಾತಕೋತ್ತರ ಪದವಿ ಅಥವಾ ಅದಕ್ಕೆ ಸರಿಸಮಾನವಾಗಿರಬೇಕು. ಈ ಎರಡೂ ಸಂದರ್ಭಗಳಲ್ಲಿ, ವೃತ್ತಿನಿರತ ಶಿಕ್ಷಣ ಹಾಗೂ ಬೋಧನಾ ಸಾಮರ್ಥ್ಯದ ಆಧಾರದ ಮೇಲೆ ಐದು ವರ್ಷಕ್ಕೊಮ್ಮೆ ಪುನರ್ಧೃಡೀಕರಣ ಪ್ರಮಾಣಪತ್ರವನ್ನು ಹೊಂದಬೇಕೆಂದು ಕರಾರು ಮಾಡಲಾಗುವುದು.

ಪಠ್ಯಕ್ರಮ ಯೋಜಕರು ಹಾಗೂ ಶಿಕ್ಷಕ ತರಬೇತುದಾರರಿಗೆ ಮುಂದಿನ ದಿನಗಳಲ್ಲಿ ಶಿಕ್ಷಣತಜ್ಞರಾಗಿ ಸಾಧನೆಗೈಯ್ಯಲು ನೆರವು ನೀಡಬಹುದಾದ ಒಂದು ವಿಭಿನ್ನ ವಿನ್ಯಾಸದ ಕಾರ್ಯಕ್ರಮವನ್ನು ಸೂಚಿಸುತ್ತೇವೆ. ಇದನ್ನು ಶಿಕ್ಷಕ ತರಬೇತಿಯ ಮುಂದಿನ ಅಥವಾ ಮೇಲಿನ ಹಂತ ಎಂದು ಪರಿಗಣಿಸದೆ, ಪ್ರಸ್ತುತ ಎಂ.ಎಡ್ ಗೆ ಸಮಾನವಾದ ವಿಭಿನ್ನ ಸ್ವರೂಪ ಹೊಂದಿರುವ ಕಾರ್ಯಕ್ರಮ, ಎಂದು ಭಾವಿಸಬೇಕು. ಹಾಗೆಯೇ ನೀತಿ ವಿಶ್ಲೇಷಕರು/ಯೋಜಕರಿಗೆ ನಾವು ಬೇರೊಂದು ವಿಭಿನ್ನ ಸ್ವರೂಪ ಹೊಂದಿರುವ ಕಾರ್ಯಕ್ರಮವನ್ನು ಸೂಚಿಸುತ್ತೇವೆ. ನೀತಿ ವಿಶ್ಲೇಷಕರು/ಯೋಜಕರಿಗೆ ಒಂದು ವಿಷಯದ ಬಗ್ಗೆ ಇರುವ ಆಳವಾದ ಪರಿಣತಿಗೆ ಪೂರಕವಾಗಿ ಸಹಾಯವಾಗುವಂತೆ ಶಿಕ್ಷಣ-ಶಿಕ್ಷಣಶಾಸ್ತ್ರದ ವಿಷಯಗಳ ಮೇಲೆ 2-3 ಕಾರ್ಯಾಗಾರಗಳನ್ನು ಆಯೋಜಿಸಬಹುದು.

| ಕೌಶಲ ಕ್ರ ಸಂ | ಕೌಶಲ/ಶಾಲಾ ಮಾದರಿ ಪ್ರತಿ ಕೋಶವು ಗಮನಿಸಿ : ಪರಿಣಾಮಕಾರಿಯಾಗಲು ಬೇಕಾದ ಪ್ರಾವೀಣ್ಯದ ಮಟ್ಟವನ್ನು ಸೂಚಿಸುತ್ತದೆ (ಹಾಗೂ ಪ್ರಸ್ತುತವಿರುವುದು ಆವರಣದಲ್ಲಿ) } | ಶಿಕ್ಷಕ ತರಬೇತುದಾರ | ಪಠ್ಯಕ್ರಮ ವಿಷಯ ಯೋಜಕರು | ನೀತಿ ರಚಿಸುವವ ವಿಶ್ಲೇಷಕ | ಶಿಕ್ಷಣತಜ್ಞರು | ಶಿಕ್ಷಕರು | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪೂರ್ವ ಪ್ರಾಥಮಿಕ | | | ಹಿರಿಯ ಪ್ರಾಥಮಿಕ | | | ಪ್ರೌಢ | | |
| | | | | | | ಸರ್ಕಾರಿ | ಕಡಿಮೆ ವೆಚ್ಚದ ಖಾಸಗಿ | ಬ ಹು ದರ್ಜೆಯ (ಗ್ರಾಮೀಣ) | ಸರ್ಕಾರಿ | ಕಡಿಮೆ ವೆಚ್ಚದ ಖಾಸಗಿ | ಬ ಹು ದರ್ಜೆಯ (ಗ್ರಾಮೀಣ) | ಸರ್ಕಾರಿ / ಕಡಿಮೆ ವೆಚ್ಚದ ಖಾಸಗಿ | ದುಬಾರಿ ವೆಚ್ಚದ ಖಾಸಗಿ | ಪ್ರತಿಷ್ಠಿತ ಶಾಲೆಗಳು K-12 |
| 1 | ಶಿಕ್ಷಣದ ತತ್ವಶಾಸ್ತ್ರ | 2(?) | 3(?) | 4(2) | 5(3) | 1(?) | 1(?) | 1(?) | 1(?) | 1(?) | 1(?) | 1(?) | 1(?) | 2(?) |
| 2 | ಕಲಿಕೆಯ ಸಿದ್ಧಾಂತಗಳು | 02(?) | 3(1) | 4(?) | 5(3) | 1(?) | 1(?) | 1(?) | 1(?) | 1(?) | 1(?) | 1(?) | 1(?) | 2(?) |
| 3 | ಇತಿಹಾಸ/ ಶಿಕ್ಷಣ ನೀತಿಯ ವಿಮರ್ಶಾತ್ಮಕ ಪರಿಶೀಲನೆ | 2(?) | 3(?) | 4(1) | 5(3) | 1(?) | 1(?) | 1(?) | 1(?) | 1(?) | 1(?) | 1(?) | 1(?) | 2(?) |
| 4 | ತತ್ವಶಾಸ್ತ್ರ/ಸಿದ್ಧಾಂತಗಳಿಂದ ಪಡೆದ ಶಿಕ್ಷಣಶಾಸ್ತ್ರ ಹಾಗೂ ತರಗತಿಯ ಮಾದರಿ | 5(3) | 5(3) | 5(1) | 5(4) | 5(1) | 5(1) | 5(1) | 5(1) | 5(1) | 5(1) | 5(1) | 5(1) | 5(2) |
| 5 | ಎರಡನೆಯ ಹಂತದ ಗಣಿತ/ವಿಜ್ಞಾನ | NR | NR | NR | NR | 5(1) | 5(1) | 5(1) | 5(1) | 5(1) | 5(1) | 5(1) | 5(2) | 5(2) |
| 6 | ಭಾಷಾ ಶಿಕ್ಷಣಶಾಸ್ತ್ರದಿಂದ ಪಡೆದ ಭಾಷಾಶಾಸ್ತ್ರ | 5(0) | 5(0) | 5(0) | 5(1) | 5(0) | 5(0) | 5(0) | 5(0) | 5(0) | 5(0) | 5(0) | 5(0) | 5(0) |
| 7 | ಉನ್ನತ ವಿಜ್ಞಾನ/ಗಣಿತ ಪರಿಣತಿ | 5(2) | 5(3) | NR | NR | NR | NR | NR | NR | NR | NR | 4(1) | 4(2) | 5(3) |
| 8 | ಸಮಾಜಶಾಸ್ತ್ರದ ಜ್ಞಾನ / ಶಿಕ್ಷಣಶಾಸ್ತ್ರ | 5(1) | 5(1) | 5(1) | NR | NR | NR | 5(1) | 5(1) | 5(1) | 5(1) | 5(1) | 5(1) | 5(1) |
| 9 | ಸಮಗ್ರ / ವಿಷಯವಾರು ಕಲಿಕೆ | 5(0) | 5(0) | 5(0) | 5(1) | 5(0) | 5(0) | 5(0) | 5(0) | 5(0) | 5(0) | 5(0) | 5(0) | 5(0) |
| 10 | ಶ್ರೇಣೀಕೃತ ಪಠ್ಯಕ್ರಮ ವಿಷಯಗಳ ಬಳಕೆಯ ಕೌಶಲ | 5(1) | 5(1) | 5(1) | 5(1) | 5(0) | 5(0) | 5(0) | NR | NR | 5(0) | NR | NR | NR |
| 11 | ವಿವಿಧ ಶ್ರೇಣಿಯ ಪಠ್ಯಕ್ರಮ ವಿಷಯ+ಕೌಶಲ | 5(1) | 5(1) | 5(1) | 5(1) | NR | NR | 5(1) | NR | NR | 5(0) | NR | NR | NR |
| 12 | ವೈಚಾರಿಕತೆಯನ್ನು ಅರ್ಥೈಸಿಕೊಳ್ಳುವಿಕೆ | 5(1) | 5(1) | 5(1) | 5(2) | NR | NR | NR | NR | NR | NR | 5(1) | 5(1) | 5(1) |
| 13 | ಒಂದು ನಿರ್ದಿಷ್ಟ ವಿಷಯದಲ್ಲಿ ಪರಿಣತಿಯನ್ನು ಹೊಂದುವುದು | 5 | 5 | 5 | 5 | 1(0) | 1(0) | 1(0) | 2(0) | 2(0) | 2(0) | 3(1) | 3(1) | 3(1) |
| 14 | ಕಲಿಕೆ v/s ಬೋಧನಾ ಕೇಂದ್ರಿತ ಶಾಲೆ | 5(0) | 5(0) | 5(0) | 5(0) | 5(0) | 5(0) | 5(0) | 5(0) | 5(0) | 5(0) | 5(2) | 5(2) | 5(2) |
| | ಟಿಪ್ಪಣಿ 1: 5 ಹೆಚ್ಚಿನ ಮಟ್ಟವನ್ನು (ಸ್ನಾತಕೋತ್ತರ ಹಂತ) ಹಾಗೂ 0 ಕಡಿಮೆ ಮಟ್ಟದ ( ಹಿರಿಯ ಪ್ರಾಥಮಿಕ ಹಂತ) ಕೌಶಲ/ಪರಿಣತಿಯನ್ನು ಪ್ರತಿನಿಧಿಸುತ್ತದೆ.<br>ಟಿಪ್ಪಣಿ 2: NR ಪ್ರಸ್ತುತವಲ್ಲ. | | | | | | | | | | | | | |

ಅಗತ್ಯವಿರುವ ಸಾಮರ್ಥ್ಯ / ಕೌಶಲವನ್ನು ಪ್ರೋತ್ಸಾಹಿಸಲು ಬೇಕಾದ ಪರ್ಯಾಯ ವಿಧಾನಗಳು

| | | | |
|---|---|---|---|
| A | ಕಾರ್ಯಾಗಾರ ( ಚಟುವಟಿಕೆ ಆಧಾರಿತ, ಪ್ರಶ್ನಿಸಿ ತಿಳಿದುಕೊಳ್ಳುವ) ವಿಧಾನ | 4,6,8,10,11 | 3 ಕಾರ್ಯಾಗಾರಗಳು, ಒಂದು 4ಕ್ಕೆ, ಎರಡನೆಯದು 6 ಹಾಗೂ 8ಕ್ಕೆ, ಮೂರನೆಯದು 10 ಹಾಗೂ 11ಕ್ಕೆ |
| B | ತೀವ್ರವಾದ ಪಠ್ಯಕ್ರಮ ವಿಧಾನ | 5,7,8,10,11,12 | ಎರಡರಿಂದ ಮೂರು ಅವಧಿಗಳು ಅದರಲ್ಲಿ ಒಂದು ಅವಧಿ ಮಾರ್ಗದರ್ಶಿತ ಅಭ್ಯಾಸ |
| C | ನಿರಂತರ / ಏಕಕಾಲೀನ ತರಬೇತಿ | 5,6,7,8,9,10,11,12 | ಅನುಕ್ರಮ ಹಂತಗಳಲ್ಲಿ ಪುನರಾವರ್ತಿತ ತರಬೇತಿಯನ್ನು ನೀಡುವುದು |
| D | ಮಾರ್ಗದರ್ಶಿತ ಅಭ್ಯಾಸ | ಎಲ್ಲ, 4-12 | |

ಶಿಕ್ಷಕರಿಗೆ ಶಿಫಾರಸು ಮಾಡಲಾದ ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮಗಳು

| | | |
|---|---|---|
| I | ಪೂರ್ವ ಪ್ರಾಥಮಿಕ ಶಿಕ್ಷಕ | ಪದವಿ+ A+ B ಒಂದು ವರ್ಷಕ್ಕೆ, ಹಾಗೂ (C+ D) ಒಂದು ವರ್ಷಕ್ಕೆ. |
| II | ಹಿರಿಯ ಪ್ರಾಥಮಿಕ ಶಿಕ್ಷಕರು | ಸ್ನಾತಕೋತ್ತರ ಪದವಿ+ A+ B ಒಂದು ವರ್ಷಕ್ಕೆ, ಹಾಗೂ (C+ D) ಒಂದು ವರ್ಷಕ್ಕೆ. |
| III | ಮಾಧ್ಯಮಿಕ ಶಿಕ್ಷಕರು | ಸ್ನಾತಕೋತ್ತರ ಪದವಿ+ A+ B (ಪದವಿ ಹಂತದ ಗಣಿತ ಹಾಗೂ ವಿಜ್ಞಾನ 5 ರಲ್ಲಿ) ಹಾಗೂ (C+ D) ಒಂದು ವರ್ಷಕ್ಕೆ, |
| IV | ಶಿಕ್ಷಕ ತರಬೇತುಗಾರರು/ ಪಠ್ಯಕ್ರಮ ಯೋಜಕರು | ಸ್ನಾತಕೋತ್ತರ ಪದವಿ+ 2 ವರ್ಷದ ಪಠ್ಯಕ್ರಮ ಕೆಲಸ 1-14, ಒಂದು ಅವಧಿಯ ಮಾರ್ಗದರ್ಶಿತ ಅಭ್ಯಾಸವನ್ನೊಳಗೊಂಡು. |
| V | ನೀತಿ ವಿಶ್ಲೇಷಕರು / ಯೋಜಕರು | ಅವರವರ ನಿರ್ದಿಷ್ಟ ಕಾರ್ಯಕ್ಷೇತ್ರದಲ್ಲಿ ಪ್ರಾವೀಣ್ಯತೆ ಹೊಂದುವುದಕ್ಕೆ ಪೂರಕವಾಗಿ 2 ವಾರದ ಕಾರ್ಯಾಗಾರ 4 ಹಾಗೂ 6ರ ಮೇಲೆ. |

**Pankaj** worked as a faculty at IRMA for more than a decade, and also at a few western universities as visiting scholar, after completing studies at IIT(R) and IIMA. He also worked as senior executive and development management consultant in various Asian countries, before starting the education project Gyan Shala in the year 2000. He may be contacted at pjain2002@yahoo.com

ಪಂಕಜ್ ಅವರು IIT(R) ಹಾಗೂ IIMA ದಲ್ಲಿ ಶಿಕ್ಷಣವನ್ನು ಪೂರೈಸಿದ ನಂತರ, IRMA ದಲ್ಲಿ ಒಂದು ದಶಕಕ್ಕೂ ಮೀರಿ ಬೋಧಕರಾಗಿ ಹಾಗೂ ಕೆಲವು ಪಾಶ್ಚಾತ್ಯ ವಿಶ್ವವಿದ್ಯಾಲಯಗಳಲ್ಲಿ ಸಂದರ್ಶಕ ವಿದ್ವಾಂಸರಾಗಿ/ಪ್ರಾಧ್ಯಾಪಕರಾಗಿ ಕೆಲಸ ಮಾಡಿದ್ದಾರೆ. 2000 ಇಸವಿಯಲ್ಲಿ ಗ್ಯಾನಶಾಲಾ ಶಿಕ್ಷಣ ಯೋಜನೆಯ ಕಾರ್ಯವನ್ನು ಆರಂಭಿಸುವ ಮುನ್ನ ಹಲವಾರು ಏಷಿಯಾದ ದೇಶಗಳಲ್ಲಿ ಹಿರಿಯ ಕಾರ್ಯನಿರ್ವಾಹಕ ಹಾಗೂ ಅಭಿವೃದ್ಧಿ ನಿರ್ವಹಣಾ ಸಲಹೆಗಾರರಾಗಿ ಕೆಲಸ ಮಾಡಿದ್ದಾರೆ. ಅವರನ್ನು pjain2002@yahoo.com ಇಲ್ಲಿ ಸಂಪರ್ಕಿಸಬಹುದು.